CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೬, ೨೦೦೫ (ಆಶ್ವಯುಜ ೧೪, ಶಕ ವರ್ಷ ೧೯೨೭) | ಸಂಚಿಕೆ ೪೦ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

### ಇಂಧನ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಇಎನ್ 73 ಪಿಪಿಸಿ 2005, ಬೆಂಗಳೂರು, ದಿನಾಂಕ: 12ನೇ/13ನೇ ಸೆಪ್ಟೆಂಬರ್ 2005**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮೆಮೊರೆಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಕಂಡಿಕೆ 23 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಭರತ್ ಲಾಲ್ ಮೀನಾ, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕರುಗಳ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ವಿ. ಮಧು, ಐ.ಎ.ಎಸ್., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ) ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1114 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

### HIGH COURT OF KARNATAKA

**NOTIFICATION**

**No. GOB(I)14(21)/2005, Bangalore, Dated: 15th September 2005**

Sri L. Subramanya, XXV Addl. City Civil and Sessions Judge, Bangalore is permitted to surrender 30 days of Earned leave as on 2.5.2005 for the block period of 2005.06.

The officer shall be paid pay and allowances admissible for the said 30 days of leave so surrendered at the rate of 1/30th of the monthly pay and allowances for each day of leave surrendered as per the provisions contained in Rule 118(2) of K.C.S.Rs.

By Order of the High Court,

**R. RANGASWAMY**

P.R. 1113 Assistant Registrar.

### ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಅಪಜೀ 126 ಎಫ್‌ಪಿಸಿ 2005, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005**

ಶ್ರೀ ಆರ್.ಎಂ. ರೇ, ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಡಾ: ಎಸ್.ಎನ್. ರಾಯ್, ಭಾಅಸೇ., ಇವರ ಸ್ಥಾನದಲ್ಲಿ ಕರ್ನಾಟಕ ವೀನರ್ಸ್ ಲಿ., ಇದರ ಆಡಳಿತ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿದೆ.

ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಾದ ಡಾ: ಎಸ್.ಎನ್. ರಾಯ್, ಭಾಅಸೇ., ಇವರು ನಿವೃತ್ತಿ ಹೊಂದಿದ್ದು ಅವರ ಸ್ಥಾನದಲ್ಲಿ ನೇಮಿಸಲಾದ ಶ್ರೀ ಇಂದು ಶ್ರೀವಾಸ್ತವ, ಭಾಅಸೇ., ಇವರನ್ನು ಕರ್ನಾಟಕ ಅರಣ್ಯ ಕೈಗಾರಿಕ ನಿಗಮದ ಆರ್ಟಿಕಲ್ ಆಫ್ ಅಸೋಸಿಯೇಶನ್ 23(1) ರಲ್ಲಿ ಪ್ರದತ್ತವಾದ ಅಧಿಕಾರದಡಿಯಲ್ಲಿ ಕರ್ನಾಟಕ ಕೈಗಾರಿಕಾ ನಿಗಮದ ಆಡಳಿತ ಮಂಡಳಿಯ ನಿರ್ದೇಶಕರನ್ನು ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 1115 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 465 ಸೇಅಸೆ 2005, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಶ್ರೀಮತಿ ಶಮೀಮ್‌ಬಾನು, ಐ.ಎ.ಎಸ್., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪುತ್ರ ತನ್ವೀರ್ ಮೊಹಮ್ಮದ್ ಇವರು 2002-2005ರ ಬ್ಲಾಕ್ ಅವಧಿಗೆ ನವದೆಹಲಿಗೆ ದಿನಾಂಕ: 12.09.2005 ರಿಂದ 14.09.2005ರ ಅವಧಿಯಲ್ಲಿ ರಜಾ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90 ರಷ್ಟು ಹಣವನ್ನು ಅಂತಿಮ ಪ್ರಯಾಣಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1116 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 467 SAS 2005, Bangalore, Dated: 10th September 2005**

Shri D.N. Narasimha Raju, IAS (KN 84) waiting for posting with immediate effect and until further orders as Secretary to Government, Finance Department, Bangalore in the newly created post.

Shri Mahendra Jain, IAS (KN 85), Commissioner for Tourism, Bangalore is transferred with immediate effect and posted until further orders as Secretary to Government (Mines, SSI & Textiles), Commerce & Industries Department, Bangalore in the existing vacancy.

Shri Yogendra Tripathy, IAS (KN 85), Commissioner for Mines & Geological Resources Development & Director of Mines & Geology, Bangalore is transferred with immediate effect and posted until further orders as Commissioner for Tourism vice Sri Mahendra Jain, IAS transferred.

The services of Shri Ganga Ram Baderia, IAS (KN 89), Managing Director, North Eastern Karnataka Road Transport Corporation. Gulbarga are withdrawn from Transport Department with immediate effect and he is posted until further orders as Commissioner for Mines & Geological Resources Development & Director of Mines & Geology, Bangalore vice Sri Yogendra Tripathy, IAS transferred.

The services of Shri B.A. Harish Gowda, IAS (KN 89), Chief Executive Officer & Executive Member Karnataka Industrial Area Development Board, Bangalore are withdrawn from Commerce and Industries Department with immediate effect and placed at the disposal of Co-operation department until further orders for being posted as Managing Director, Karnataka State Co-operative Apex Bank Limited, Bangalore vice Shri G.S. Narayana Swamy, IAS transferred.

The services of Shri G.S. Narayana Swamy, IAS (KN 90), Managing Director, Karnataka State Co-operative Apex Bank Limited, Bangalore are withdrawn from Co-operation department with immediate effect and placed at the disposal of Commerce & Industries department until further orders for being posted as Chief Executive Officer & Executive Member Karnataka Industrial Area Development Board, Bangalore vice Shri B.A. Harish Gowda, IAS transferred.

By Order and in the name of the Governor of Karnataka,

**EKROOP CAUR**

P.R. 1118 Deputy Secretary to Government,

Department of Personnel and Administrative Reforms (Services).

## ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಾಪ್ರಯು 95 ಪಿಐಎಸ್ 2005, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತದ ನಿಯಮಾವಳಿಗಳ 100ನೇ ಅನುಚ್ಛೇದದನ್ವಯ ಅಧ್ಯಕ್ಷರಾಗಿ ಶ್ರೀಮತಿ ಎಲ್. ಶಾಂತಕುಮಾರಿ, ಐಎಎಸ್, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ

ಇವರನ್ನು ಡಾ: ಸಿ.ಎಸ್. ಕೇದಾರ್, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಪ್ಪ**

ಪಿ.ಆರ್. 1119 ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ವಾಪ್ರಯು 34 ಪ್ರವಾನಿ 2005, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 467 ಎಸ್ಎಎಸ್ 2005, ದಿನಾಂಕ: 10.09.2005 ರಲ್ಲಿ ಶ್ರೀ ಯೋಗೇಂದ್ರ ತ್ರಿಪಾಠಿ, ಐಎಎಸ್, ಇವರನ್ನು ಪ್ರವಾಸೋದ್ಯಮ ಇಲಾಖೆಯ ಆಯುಕ್ತರನ್ನಾಗಿ ನೇಮಿಸಿದೆ.

ಶ್ರೀ ಯೋಗೇಂದ್ರ ತ್ರಿಪಾಠಿ, ಐಎಎಸ್ ಇವರನ್ನು ಪ್ರವಾಸೋದ್ಯಮ ಇಲಾಖೆಯ ಆಯುಕ್ತರ ಹುದ್ದೆಯ ಜೊತೆಗೆ ಹೆಚ್ಚುವರಿ ಪ್ರಭಾರದಲ್ಲಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮದ ನಿರ್ದೇಶಕರ ಮಂಡಳಿಗೆ ನಿರ್ದೇಶಕರನ್ನಾಗಿ ಹಾಗೂ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಪ್ಪ**

ಪಿ.ಆರ್. 1120 ಸರ್ಕಾರದ ಅಧೀನ ಕಾರ್ಯದರ್ಶಿ,

ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ವಾಪ್ರಯು 61 ಪ್ರವಾಇ 2005, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಪ್ರಯು 61 ಪ್ರವಾಇ 2005 ದಿನಾಂಕ: 01.09.2005 ರಲ್ಲಿ ಶ್ರೀ ಎಸ್.ಎನ್. ನಾಗರಾಜ್, ಇವರನ್ನು ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಲಾಗಿದ್ದ ಅಧಿಸೂಚನೆಯನ್ನು ರದ್ದುಪಡಿಸಿ ಶ್ರೀ ಸೆಲ್ವಕುಮಾರ್, ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರನ್ನು ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರದ ಸದಸ್ಯ ಹಾಗೂ ಅಧ್ಯಕ್ಷರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

**ಎಸ್. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1121 ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ.

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಆ-1:159:ಇಬಸ:2005, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

2003ನೇ ಸಾಲಿನ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳ ನಿಯಮ 6(ii)ರ ಪ್ರಕಾರ ಮಾನ್ಯ ಸಭಾಪತಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ರೀತ್ಯಾ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಹಿರಿಯ ಸಹಾಯಕಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಎಸ್. ಶಕುಂತಳ ಇವರನ್ನು (ಶ್ರೀ ಕೆ.ಬಿ. ಓಂಪ್ರಕಾಶ್, ಶಾಖಾಧಿಕಾರಿ, ಇವರನ್ನು ಅಧೀನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿದ್ದರಿಂದ ತೆರವಾಗಿರುವ ಶಾಖಾಧಿಕಾರಿ ಹುದ್ದೆಗೆ) ವೇತನ ಶ್ರೇಣಿ ರೂ.6000-150-7200-200-8800-260-10880-320-11200 ರಲ್ಲಿ ಶಾಖಾಧಿಕಾರಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ನೇಮಕ ಮಾಡಲಾಗಿದೆ.

ಸಭಾಪತಿಯವರ ಆದೇಶಾನುಸಾರ,

**ಹೆಚ್.ಡಿ. ನಾಗರಾಜ**

ಪಿ.ಆರ್. 1122 ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು.

**HIGH COURT OF KARNATAKA**

**NOTIFICATION**

**No. GOB(I)28/2001, Bangalore, Dated: 30th August 2005**

In pursuance to Rule 118-A (1)(a) of K.C.S.Rs., sanction is hereby accorded for payment of cash equivalent of leave salary for Earned Leave at the credit of Sri Siddegowda, District Judge (Retired), subject to a maximum of 240 days, on attaining the age of superannuation (58 years) as on 30.06.2005. It is certified that no Departmental Enquiry was pending against the said Officer, as on that date.

By Order of the High Court,

**N. ANANDA**

P.R. 1124 Registrar General.

## HIGH COURT OF KARNATAKA

### NOTIFICATION

**No. GOB(I)1/2005, Bangalore, Dated: 15th September 2005**

The Presiding Officer of the Court of III Addl. District and Sessions Judge, Mysore, is concurrently appointed as the Presiding Officer of the Court of II Addl. District and Sessions Judge, Mysore (Vacant Court), with immediate effect and until further orders.

By Order of the High Court,

**N. ANANDA**

P.R. 1123 Registrar General.

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 462 SAS 2005, Bangalore, Dated: 16th September 2005**

Smt. Lakshmi Venkatachalam, IAS, Principal Secretary to Government, Commerce and Industries Department, Bangalore is sanctioned earned leave for 12 days from 21.09.2005 to 02.10.2005 to enable her to participate in the 2nd World Conference organised by the International Coffee Organisation in Salvodor, Brazil and to visit places in Brazil.

The Secretary to Government (Mines, SSI & Textiles) Commerce and Industries Department, Bangalore is placed in additional charge of the post of Principal Secretary to Government, Commerce and Industries Department, Bangalore during the above mentioned leave period.

By Order and in the name of the Governor of Karnataka,

**K. SUDHAKARA SHETTY**

P.R. 1125 Under Secretary to Government,

Department of Personnel and Administrative Reforms (Services-I).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 221 ಸಅಸೇ 2005, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005**

ಶ್ರೀ ಹೆಚ್.ಜಿ. ಸತ್ಯಮೂರ್ತಿ, ಮೀನುಗಾರಿಕೆ : ಹಿರಿಯ ಸಹಾಯಕ ನಿರ್ದೇಶಕರು, ಮೀನುಗಾರಿಕೆ ಇಲಾಖೆ, ಪ್ರಸ್ತುತ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ವೈಜ್ಞಾನಾಧಿಕಾರಿ (ಗ್ರೂಪ್ 'ಬಿ') ಇವರಿಗೆ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ಹುದ್ದೆಗೆ ಬಡ್ತಿ ನೀಡಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ವೈಜ್ಞಾನಾಧಿಕಾರಿ-1 (ಗ್ರೂಪ್ 'ಎ') ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಿರುವುದರಿಂದ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ವೈಜ್ಞಾನಾಧಿಕಾರಿ-1 (ಗ್ರೂಪ್ 'ಎ') ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1126 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 239 ರಾಲೆಪ 05, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಶ್ರೀ ಮಹಂತಪ್ಪ ಸುಲೇಬಾವಿ, ಪ್ರಧಾನ ಮುಖ್ಯ ಲೆಕ್ಕಾಧಿಕಾರಿಗಳು, ಕೆ.ಬಿ.ಜೆ.ಎನ್.ಎಲ್, ಆಲಮಟ್ಟಿ, ಬಿಜಾಪುರ ಜಿಲ್ಲೆ ಅವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಜಲಸಂಪನ್ಮೂಲ ಇಲಾಖೆಯಿಂದ ಹಿಂದಕ್ಕೆ ಪಡೆದು ಅವರನ್ನು ಮುಂದಿನ ಆದೇಶದವರೆಗೆ ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇಲ್ಲಿ ಖಾಲಿ ಇರುವ ಹುದ್ದೆಗೆ ನೇಮಿಸಲಾಗಿದೆ.

ಅಧಿಸೂಚನೆ ಸಂಖ್ಯೆ: ಆಇ 230 ರಾಲೆಪ 2005 ದಿನಾಂಕ: 30.6.2005ನ್ನು ಭಾಗಶಃ ಮಾರ್ಪಡಿಸಿ, ಶ್ರೀ ಎಂ.ಕೆ. ಮುರಳೀಧರ್, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಹಾಗೂ ಪ್ರಸ್ತುತ ಬಾಗಲಕೋಟೆ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಗೆ ವರ್ಗಾವಣೆ ಆದೇಶದಲ್ಲಿರುವ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆ.ಬಿ.ಜೆ.ಎನ್.ಎಲ್, ಆಲಮಟ್ಟಿ, ಬಿಜಾಪುರ ಜಿಲ್ಲೆ ಇಲ್ಲಿನ ಪ್ರಧಾನ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಗೆ ಶ್ರೀ ಮಹಂತಪ್ಪ ಸುಲೇಬಾವಿ ರವರ ಸ್ಥಾನದಲ್ಲಿ ನೇಮಿಸಲು ಜಲಸಂಪನ್ಮೂಲ ಇಲಾಖೆ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ.ಆರ್. 1128 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 134 ಸಅಸೇ 2005, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005**

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿರುವ ಕೆಳಕಂಡ ಸರ್ಕಾರದ ಅಧೀನ ಕಾರ್ಯದರ್ಶಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ.10620-14960ರ ವೇತನ ಶ್ರೇಣಿಯ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಶ್ರೀ ಹುಲಿಯಪ್ಪ, ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ). | ಸರ್ಕಾರದ ಉಪಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ - ಶ್ರೀಮತಿ ಕೆ.ಎಸ್. ಗಾಯಿತ್ರಿ ಇವರ ಸ್ಥಾನದಲ್ಲಿ |
| 2 | ಶ್ರೀ ಮಂಜೇಗೌಡ, ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | ಸರ್ಕಾರದ ಉಪಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ - ಶ್ರೀಮತಿ ಸೈಯದಾ ಅಫಜಲುನ್ನೀಸಾ ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |

**ಭಾಗ-1**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಶ್ರೀಮತಿ ಕೆ.ಎಸ್. ಗಾಯಿತ್ರಿ, ಉಪಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಂತರಿಕ ಆರ್ಥಿಕ ಸಲಹೆಗಾರರು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ - ಶ್ರೀ ಕೆ.ಆರ್. ರಾಮದುರ್ಗ್ ಇವರ ನಿಯೋಜನೆಯಿಂದ ತೆರವಾದ ಸ್ಥಾನದಲ್ಲಿ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1127

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

### ಅಧಿಸೂಚನೆ

**ಸಂಖ್ಯೆ: ಸಿಆಸುಇ 265 ಸಅಸೇ 2005, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಶ್ರೀ ಎಂ.ಜಿ. ಕೌಜಲಗಿ, ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ), ಕರ್ನಾಟಕ ಸರ್ಕಾರದ ಸಚಿವಾಲಯ ಇವರು ದಿನಾಂಕ: 30.5.2005 ರಿಂದ 4.6.2005 ರವರೆಗೆ (ಒಟ್ಟು 6 (ಆರು) ದಿನಗಳು) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸ್ಥಳ ನಿಯುಕ್ತಿಗಾಗಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8(15) (ಎಫ್) ರ ಅನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1129

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ವಸತಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಇ 3541 ಹೆಕಾ 2005, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 461 ಎಸ್ಎಎಸ್ 2005, ದಿನಾಂಕ: 12.09.2005 ರಲ್ಲಿ ಶ್ರೀ ಅತುಲ್ ಕುಮಾರ್ ತಿವಾರಿ, ಭಾ.ಆ.ಸೇ., ಇವರ ಸೇವೆಯನ್ನು ವ್ಯವಸ್ಥಾಪಕ ನಿರ್ದೇಶಕರು, ರಾಜೀವ್‌ಗಾಂಧೀ ಗ್ರಾಮೀಣ ವಸತಿ ನಿಗಮ ನಿಯಮಿತ, ಬೆಂಗಳೂರು ಹುದ್ದೆಯಲ್ಲಿ ನಿಯುಕ್ತಿಗೊಳಿಸಲು ವಸತಿ ಸಚಿವಾಲಯದ ವಶಕ್ಕೆ ನೀಡಲಾಗಿದೆ.

ಶ್ರೀ ಅತುಲ್ ಕುಮಾರ್ ತಿವಾರಿ, ಭಾ.ಆ.ಸೇ., ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ರಾಜೀವ್‌ಗಾಂಧೀ ಗ್ರಾಮೀಣ ವಸತಿ ನಿಗಮ ನಿಯಮಿತ, ಬೆಂಗಳೂರು ಈ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರುನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1130

ಪೀಠಾಧಿಕಾರಿ-2, ವಸತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 153 ಆಸೇವ 2005, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005**

ಜಿಲ್ಲಾ ಯೋಜನಾ ವ್ಯವಸ್ಥಾಪಕರು, ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ ಪ್ರಾಜೆಕ್ಟ್, ತುಮಕೂರು ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಶ್ರೀ ಎಂ.ಓ. ನಾಗರಾಜ್, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ

ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ಬೆಂಗಳೂರು - ಖಾಲಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1132 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 141 ಸೇಇಮು 2004, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2005**

ಶ್ರೀ ಹೆಚ್.ಎಂ. ಖಯ್ಯೂಂ ಅಲಿ, ಜಂಟಿ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರಿಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ.12800 - 16720ರ ಅಪರ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅಪರ ನಿರ್ದೇಶಕರು (ಅಂತರ್ಜಲ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1133 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 152 ಆಸೇವ 2005, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2005**

ಕರ್ನಾಟಕ ಆಡಳಿತ ಸೇವೆಯ (ಆಯ್ಕೆ ಶ್ರೇಣಿ/ಹಿರಿಯ ಶ್ರೇಣಿ/ಕಿರಿಯ ಶ್ರೇಣಿ) ವೃಂದಕ್ಕೆ ಸೇರಿದ ಈ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ನೇಮಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರುಮತ್ತು ಪ್ರಸ್ತುತ ಹುದ್ದೆ | ವರ್ಗಾಯಿಸಿ ನೇಮಿಸಿರುವ ಹುದ್ದೆ |
|---|---|---|
| 1 | ಹೆಚ್. ಚಿತ್ತರಂಜನ್, (ಆಯ್ಕೆ ಶ್ರೇಣಿ) ಮುಖ್ಯ ಸಂಪಾದಕರು, ಕರ್ನಾಟಕ ಗೆಜೆಟಿಯರ್ ಇಲಾಖೆ, ಬೆಂಗಳೂರು. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು - ಖಾಲಿ ಹುದ್ದೆಗೆ. |
| 2 | ಡಾ: ಕೆ.ಎನ್. ಚಂದ್ರಶೇಖರ್, (ಆಯ್ಕೆ ಶ್ರೇಣಿ) ರಿಜಿಸ್ಟ್ರಾರ್ (ಮೌಲ್ಯಮಾಪನ), ತುಮಕೂರು ವಿಶ್ವವಿದ್ಯಾಲಯ, ತುಮಕೂರು. | ಕಾರ್ಯಕಾರಿ ನಿರ್ದೇಶಕರು, ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ, ಬೆಂಗಳೂರು - ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಆರ್ಥಿಕ ಇಲಾಖೆ (ಅಬಕಾರಿ)ಯ ವಶಕ್ಕೆ ನೀಡಿದೆ. |
| 3 | ಎಸ್. ಎ. ಜಿಲಾನಿ, (ಹಿರಿಯ ಶ್ರೇಣಿ) ನೇಮಕಾತಿ ನಿರೀಕ್ಷಣೆಯಲ್ಲಿ | ಮುಖ್ಯ ಸಂಪಾದಕರು, ಕರ್ನಾಟಕ ಗೆಜೆಟಿಯರ್ ಇಲಾಖೆ, ಬೆಂಗಳೂರು- ಶ್ರೀ ಹೆಚ್. ಚಿತ್ತರಂಜನ್ ಇವರ ವರ್ಗಾವಣೆಯಿಂದ ತೆರವಾದ ಹುದ್ದೆಯಲ್ಲಿ. |
| 4 | ಸೈಯದ್ ಅಬ್ದುಲ್ ರಬ್, (ಹಿರಿಯ ಶ್ರೇಣಿ) ನೇಮಕಾತಿ ನಿರೀಕ್ಷಣೆಯಲ್ಲಿ | ವ್ಯವಸ್ಥಾಪಕ ನಿರ್ದೇಶಕರು, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ ನಿಯಮಿತ, ಗುಲ್ಬರ್ಗಾ - ಶ್ರೀ ಗಂಗಾರಾಂ ಬಡೇರಿಯಾ, IAS ಇವರ ಸ್ಥಾನದಲ್ಲಿ ನೇಮಿಸಲು ಇವರ ಸೇವೆಯನ್ನು ಸಾರಿಗೆ ಇಲಾಖೆಯ ವಶಕ್ಕೆ ನೀಡಿದೆ.- |
| 5 | ಇ. ರಾಧಾಕೃಷ್ಣ (ಹಿರಿಯ ಶ್ರೇಣಿ) ಜಂಟಿ ನಿರ್ದೇಶಕರು (ಆಡಳಿತ) ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. | ವ್ಯವಸ್ಥಾಪಕ ನಿರ್ದೇಶಕರು, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ ನಿಯಮಿತ, ಹುಬ್ಬಳ್ಳಿ - ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಸಾರಿಗೆ ಇಲಾಖೆಯ ವಶಕ್ಕೆ ನೀಡಿದೆ. |
| 6 | ಬಿ.ಆರ್. ಕೃಷ್ಣನ್, (ಕಿರಿಯ ಶ್ರೇಣಿ) ನೇಮಕಾತಿ ನಿರೀಕ್ಷಣೆಯಲ್ಲಿ | ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು - ಶ್ರೀ ಇ. ಚನ್ನಗಂಗಪ್ಪ ಇವರ ಸ್ಥಾನದಲ್ಲಿ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ. |
| 7 | ಎಂ.ಎ. ರಾಜಶೇಖರ್, (ಕಿರಿಯ ಶ್ರೇಣಿ) ಸರ್ಕಾರದ ಅಧೀನ ಕಾರ್ಯದರ್ಶಿ (ಭೂಸ್ವಾಧೀನ) ಕಂದಾಯ ಇಲಾಖೆ, ಬೆಂಗಳೂರು. | ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು - ಖಾಲಿ ಹುದ್ದೆಗೆ |
| 8 | ಎ. ಮರಿಗೌಡ, (ಕಿರಿಯ ಶ್ರೇಣಿ) ಉಪವಿಭಾಗಾಧಿಕಾರಿ, ಸೇಡಂ ಉಪವಿಭಾಗ, ಸೇಡಂ, ಗುಲ್ಬರ್ಗಾ ಜಿಲ್ಲೆ. | ವಿಶೇಷ ಭೂಸ್ವಾಧೀನಾಧಿಕಾರಿ, ಸಿಂಗಟಲೂರು ಏತ ನೀರಾವರಿ ಯೋಜನೆ, ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ - ಖಾಲಿ ಹುದ್ದೆಗೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಏಕರೂಪ್ ಕೌರ್**

ಪಿ.ಆರ್. 1134 ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 245 ಸಆಸೇ 2005, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಈ ಕೆಳಕಂಡ ಅಧಿಕಾರಿಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ದಿನಾಂಕ: 28.7.2005ರ ಅನ್ವಯ 5ನೇ ರಾಜ್ಯ ವೇತನ ಆಯೋಗದಲ್ಲಿ ಸೃಜಿಸಲಾಗಿರುವ ಹುದ್ದೆಗಳಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಸದರಿ ವೇತನ ಆಯೋಗದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಿಯೋಜನೆಯ ಮೇರೆಗೆ ವರ್ಗಾಯಿಸಿ ನೇಮಿಸಲಾಗಿದೆ.

| ಕ್ರ. ಸಂ. | ಹೆಸರು ಮತ್ತು ಪದನಾಮ | 5ನೇ ರಾಜ್ಯ ವೇತನ ಆಯೋಗದಲ್ಲಿ ನಿಯೋಜನೆ ಮೇಲೆ ನೇಮಿಸಲಾಗಿರುವ ಹುದ್ದೆ |
|---|---|---|
| 1 | ಶ್ರೀ ಕೆ.ಆರ್. ರಾಮದುರ್ಗ, ಉಪ ಕಾರ್ಯದರ್ಶಿ (ಅಂ.ಆ.ಸ.) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. | ಉಪ ಕಾರ್ಯದರ್ಶಿ |
| 2 | ಶ್ರೀ ಪಿ.ಡಿ. ಸಿದ್ಧಾಂತಿ, ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. | ಅಧೀನ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1136

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 472 ಸೇಆಸೆ 2005, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2005**

ಶ್ರೀಮತಿ ಶಮೀಮ್ ಬಾನು, ಐ.ಎ.ಎಸ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು ರವರ, ದಿನಾಂಕ: 20.9.2005 ರಿಂದ 30.9.2005 ರವರೆಗೆ ಇಂಗ್ಲೆಂಡ್ ಮತ್ತು ಅಮೆರಿಕಾ ಭೇಟಿ ಸಂದರ್ಭದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರುರವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1137

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 324 ಅಸೇಇ 2005, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಶ್ರೀ ವಿ. ಶ್ರೀರಾಮರೆಡ್ಡಿ, ಕೆ.ಎ.ಎಸ್, (ಆಯ್ಕೆ ಶ್ರೇಣಿ) ಅಧಿಕಾರಿ ಹಾಲಿ ಸರ್ಕಾರದ ಜಂಟಿ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರು ದಿನಾಂಕ: 16.03.2005 ರಿಂದ ದಿನಾಂಕ: 30.05.2005ರವರೆಗೆ ಕಳೆದ ಅವಧಿಯನ್ನು ಈ ಕೆಳಕಂಡಂತೆ ಸಕ್ರಮಗೊಳಿಸಿ ಆದೇಶಿಸಿದೆ.

| | | |
|---|---|---|
| (I) | ದಿನಾಂಕ: 16.03.2005 ರಿಂದ 27.05.2005ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 8(15)(ಎಫ್)ರ ಪ್ರಕಾರ ಕಡ್ಡಾಯ ನೇಮಕಾತಿ ನಿರೀಕ್ಷಣಾ ಅವಧಿ. |
| (II) | ದಿನಾಂಕ: 28.05.2005 ರಿಂದ 30.05.2005 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 83 ರನ್ವಯ ಅಧಿಕಾರಿಯ ಹಕ್ಕಿನಲ್ಲಿರುವ ಪರಿವರ್ತಿತ ರಜೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1138

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 38 ಸೇಇಮು 2005, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಅಧಿಸೂಚನೆ ಸಂಖ್ಯೆ: ಪಸಂಮೀ 142 ಪಆಸೇ 2004, ದಿನಾಂಕ: 19.08.2004 ರನ್ವಯ ದಿನಾಂಕ: 30.06.2005 ರಂದು 58 ವರ್ಷಗಳ ವಯೋಮಿತಿ ತಲುಪಿ ನಿವೃತ್ತಿ ಹೊಂದಿರುವ ಡಾ: ಎಲ್. ಶಾಂತಕುಮಾರ್, ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 15 ಎಸ್‌ಆರ್‌ಎಸ್ 97 ದಿನಾಂಕ: 20.09.1997 ರನ್ವಯ ನಿವೃತ್ತಿ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು 240 ದಿನಗಳ ಗರಿಷ್ಟ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮ 118-ಎ (1) ರಡಿ ಹಾಗೂ ಉಪನಿಯಮ (4)ರ ವ್ಯಾಪ್ತಿಗೊಳಪಟ್ಟು ನಗದೀಕರಣಗೊಳಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1139

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 49 ಸೇಇಮು 2004, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2005**

ಅಧಿಸೂಚನೆ ಸಂಖ್ಯೆ: ಸಿಆಸುಇ 49 ಸೇಇಮು 2004, ದಿನಾಂಕ: 07.05.2005 ರಲ್ಲಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಹುದ್ದೆಗೆ ನೇಮಿಸಿರುವ ಶ್ರೀ ಕೆ. ಶ್ರೀಕಂಠೇಶ್ವರ ಇವರ ಬಡ್ತಿಯನ್ನು ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಪಿ ಈಶ್ವರ್‌ಭಟ್, ಇವರು ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ: 16.05.2005 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 60 ರಡಿ ಕ್ರಮಬದ್ಧಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1140 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 218 ಸಅರ 2005, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಆರ್ಥಿಕ (ಆ.ಆ.ಕೋ) ಇಲಾಖೆಯ ಸರ್ಕಾರದ ಸಹ ಕಾರ್ಯದರ್ಶಿ ಶ್ರೀ ಸೈಯದ್ ಉಮರ್ ಫಾರೂಖ್ ಇವರಿಗೆ 120 ದಿನಗಳ ಸಂಯುಕ್ತ ರಜೆಯನ್ನು ಈ ಕೆಳಕಂಡಂತೆ ಮಂಜೂರು ಮಾಡಲಾಗಿದೆ. ರಜೆಯು ಮುಗಿದ ನಂತರ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

1. ದಿನಾಂಕ: 14.9.2005 ರಿಂದ 13.10.2005 ರವರೆಗೆ 30 ದಿನಗಳ ಪರಿವರ್ತಿತ ರಜೆ.
2. ದಿನಾಂಕ: 14.10.2005 ರಿಂದ 11.01.2006 ರವರೆಗೆ 90 ದಿನಗಳ ಗಳಿಕೆ ರಜೆ.

ಮೇಲ್ಕಂಡ ರಜೆ ಅವಧಿಯಲ್ಲಿ ಅದೇ ಇಲಾಖೆಯ ಸಹ ಕಾರ್ಯದರ್ಶಿ ಶ್ರೀ ಎ.ಎನ್. ಶ್ರೀಧರ್, ಸಹ ಕಾರ್ಯದರ್ಶಿ (ಪಿ.ಎಂ.ಯು), ಆರ್ಥಿಕ ಇಲಾಖೆ ರವರನ್ನು ಪ್ರಭಾರದ ಮೇಲೆ ಮೇಲ್ಕಂಡ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1141 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಒಳಾಡಳಿತ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಒಇ 595 ಪಿಪಿಇ 2005, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್ 2005**

ಮಂಡ್ಯದ 2ನೇ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿ.ಸಿ. ಸಂಖ್ಯೆ: 22:1997 ಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಶ್ರೀ ಬಿ. ಶಿವರಾಮೇಗೌಡ, ನಿವೃತ್ತ ಸರ್ಕಾರಿ ಅಭಿಯೋಜಕರು ಪ್ರಸ್ತುತ ವಕೀಲರು ಇವರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿದೆ.

ಸದರಿ ಮೇಲ್ಕಂಡ ಪ್ರಕರಣದಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರ ವೆಚ್ಚವನ್ನು ಅರ್ಜಿದಾರರಾದ ಶ್ರೀ ಕೆ. ಲಿಂಗೇಗೌಡ ರವರು ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್. 1142 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಕುಕ 528 ಎಂಎಸ್‌ಎಸ್ 2005, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 122 ಎಸ್‌ಪಿಎಸ್ 2005 ದಿನಾಂಕ: 20.08.2005 ರಲ್ಲಿ ಡಾ: ಸುರೇಶ್ ಕುನ್ಹಿ ಮೊಹಮ್ಮದ್, ಐಪಿಎಸ್ (ಕೆಎಂ-92) ಇವರನ್ನು ಅಡಿಷನಲ್ ಪ್ರೊಜೆಕ್ಟ್ ಡೈರೆಕ್ಟರ್, ಏಡ್ಸ್ ಪ್ರಿವೆನ್‌ಷನ್ ಸೊಸೈಟಿ, ಬೆಂಗಳೂರು ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಶಕ್ಕೆ ನೀಡಿರುವುದರಿಂದ, ಸದರಿಯವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಅಡಿಷನಲ್ ಪ್ರೊಜೆಕ್ಟ್ ಡೈರೆಕ್ಟರ್, ಕರ್ನಾಟಕ ರಾಜ್ಯ ಏಡ್ಸ್ ಪ್ರಿವೆನ್‌ಷನ್ ಸೊಸೈಟಿ, ಬೆಂಗಳೂರು ಈ ಹುದ್ದೆಗೆ ನೇಮಿಸಿ ಆದೇಶಿಸಿದೆ.

ಸದರಿ ಅಧಿಕಾರಿಯು ನೇಮಿಸಿದ ಸ್ಥಳದಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾದ ಬಗ್ಗೆ ಸರ್ಕಾರವನ್ನೊಳಗೊಂಡಂತೆ ಸಂಬಂಧಪಟ್ಟವರೆಲ್ಲರಿಗೂ ಪ್ರಭಾರ ವರ್ಗಾವಣೆ ಪತ್ರವನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತೆಗ್ಗಿನಮನಿ**

ಪಿ.ಆರ್. 1143 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.